# ಕರ್ನಾಟಕ ವಿಧಾನ ಪರಿಷತ್ತು

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಬಿ.ಎಂ. ಫಾರೂಖ್**

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1030**

**ಉತ್ತರಿಸಬೇಕಾದ ದಿನಾಂಕ : 21.09.2021**

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಕರ್ನಾಟಕ ಕೃಷಿ ಮತ್ತು ಗ್ರಾಮೀಣ ಬ್ಯಾಂಕಿಗೆ ನಬಾರ್ಡ್‌ನಿಂದ ಸಾಲ ಪಡೆಯಲು ಪ್ರತಿ ವರ್ಷದಂತೆ ಈ ವರ್ಷವೂ ಗ್ಯಾರಂಟಿ ನೀಡಲಾಗಿದೆಯೇ: ನೀಡಲಾಗಿದ್ದಲ್ಲಿ, ಯಾವ ದಿನಾಂಕದಿಂದ ಜಾರಿಗೆ ಬರುವಂತೆ ನಬಾರ್ಡ್‌ನಿಂದ ಸಾಲ ಬಿಡುಗಡೆಯಾಗಿದೆ; ಎಷ್ಟು ಹಣ ಬಿಡುಗಡೆಯಾಗಿದೆ; | 2021–2022 ನೇ ಸಾಲಿಗೆ ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃಧಿ ಬ್ಯಾಂಕಿಗೆ ನಬಾರ್ಡ್‌ನಿಂದ ರೂ.1550.00 ಕೋಟಿಗಳ ಪುನರ್ಧನ ಸಾಲ ಪಡೆಯಲು ಆರ್ಥಿಕ ಇಲಾಖೆಯಿಂದ ಅನುಮತಿ ದೊರೆತಿದ್ದು, ಸರ್ಕಾರದ ಖಾತರಿ ಅವಧಿಯನ್ನು ದಿ:01.04.2021 ರಿಂದ ದಿ:31.03.2022 ರವರೆಗೆ ವಿಸ್ತರಿಸಲು ಸಚಿವ ಸಂಪುಟ ಅನುಮೋದನೆಗೆ ಮಂಡಿಸಲಾಗುತ್ತಿದೆ. |
| ಆ. | ರಾಜ್ಯದ ರೈತರು ದೀರ್ಘಾವಧಿ ಸಾಲಕ್ಕಾಗಿ ಪರದಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕಸ್ಕಾರ್ಡ್ ಬ್ಯಾಂಕ್ ವಸೂಲಾತಿ ಪ್ರಮಾಣ ಕಡಿಮೆಯಿದ್ದ ಕಾರಣ ಸರ್ಕಾರದ ಖಾತರಿ ಪಡೆಯಲು ಬ್ಯಾಂಕ್ ವಿಫಲವಾಗಿದ್ದು, ಅನುದಾನದ ಕೊರತೆ ಇದ್ದಿದ್ದರಿಂದ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳು ರೈತರಿಗೆ ದೀರ್ಘಾವಧಿ ಸಾಲ ವಿತರಿಸಲು ವಿಳಂಬವಾಗಿರುತ್ತದೆ. ಪ್ರಸ್ತುತ ಬ್ಯಾಂಕ್ ವಸೂಲಾತಿ ಪ್ರಮಾಣ ಮಿತಿಯನ್ನು ಪೂರೈಸಿರುವುದರಿಂದ ಸರ್ಕಾರದ ಗ್ಯಾರಂಟಿ ನೀಡಲು ಕ್ರಮವಹಿಸಲಾಗುತ್ತಿದೆ. |
| ಇ. | ಸರ್ಕಾರದಿಂದ ಪ್ರತಿ ವರ್ಷ ಮಾರ್ಚ್–ಏಪ್ರಿಲ್ ತಿಂಗಳಿನಲ್ಲಿ ನಬಾರ್ಡ್‌ಗೆ ಗ್ಯಾರಂಟಿ ನೀಡಲಾಗುತ್ತಿದ್ದು, ಇದುವರೆವಿಗೂ 5–6 ತಿಂಗಳಾದರೂ ದೀರ್ಘಾವಧಿ ಸಾಲ ಪಡೆಯಲು ರೈತರಿಗೆ ತೊಂದರೆಯಾಗಿರುವುದರಿಂದ ಕೂಡಲೇ ರೈತರು ದೀರ್ಘಾವಧಿ ಸಾಲ ಪಡೆಯಲು ಸರ್ಕಾರ ಕ್ರಮ ಕೈಗೊಳ್ಳವುದೇ? | 2020–21 ನೇ ಸಾಲಿನಲ್ಲಿ ಗ್ಯಾರಂಟಿ ನೀಡಲು ವಿಧಿಸಿದ ಷರತ್ತನ್ನು ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃಧಿ ಬ್ಯಾಂಕ್ ಪಾಲಿಸದೇ ಇದ್ದುದರಿಂದ ಗ್ಯಾರಂಟಿ ನೀಡಲು ತಡವಾಗಿದ್ದು, ಷರತ್ತನ್ನು ಪ್ರಸ್ತುತ ಕಸ್ಕಾರ್ಡ್ ಬ್ಯಾಂಕ್ ಪೂರೈಸಿರುವುದರಿಂದ ಸರ್ಕಾರದ ಗ್ಯಾರಂಟಿ ಪಡೆಯಲು, ಸಚಿವ ಸಂಪುಟದ ಅನುಮೋದನೆ ಪಡೆದು ಕೂಡಲೇ ರೈತರು ದೀರ್ಘಾವಧಿ ಸಾಲ ಪಡೆಯುವ ವ್ಯವಸ್ಥೆ ಮಾಡಲಾಗುವುದು. |

**ಸಂಖ್ಯೆ: ಸಿಒ 277 ಸಿಎಲ್ಎಸ್ 2021**

ಎಸ್. ಟಿ. ಸೋಮಶೇಖರ್

(ಎಸ್.ಟಿ ಸೋಮಶೇಖರ್)

ಸಹಕಾರ ಸಚಿವರು